ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಕಾಡುಪ್ರಾಣಿ ಹಾವಳಿಯಿಂದ ಬೆಳೆನಾಶ ಹೊಂದಿರುವ ರೈತರಿಗೆ ಪರಿಹಾರ ಧನ ನೀಡುವ ಬಗ್ಗೆ

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ(ನಾಮನಿರ್ದೇಶನ ಹೊಂದಿದವರು) –

54 (44) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ 2017ರ ಹಿಂದೆ ರೈತರು ಕಾಡುಪ್ರಾಣಿಗಳಿಂದ ಬೆಳೆನಾಶದ ಪರಿಹಾರ ಕೋರಿ ಸಲ್ಲಿಸಿದ ಅರ್ಜಿಗಳಲ್ಲಿ ಇತ್ಯರ್ಥವಾಗದೇ ಬಾಕಿ ಉಳಿದಿರುವ ಅರ್ಜಿಗಳ ಸಂಖ್ಯೆ ಎಷ್ಟು; ಅವುಗಳಲ್ಲಿ ಕೋರಿದ ಪರಿಹಾರಧನದ ಮೊತ್ತವೆಷ್ಟು; (ವಲಯವಾರು ಮಾಹಿತಿಯನ್ನು ಒದಗಿಸುವುದು)

(ಆ) ರಾಜ್ಯದಲ್ಲಿ 2017ರ ನಂತರ ಕಾಡುಪ್ರಾಣಿಗಳಿಂದ ಬೆಳೆನಾಶದ ಪರಿಹಾರ ಕೋರಿ ಸಲ್ಲಿಸಲಾದ ಅರ್ಜಿಗಳ ಸಂಖ್ಯೆ ಹಾಗೂ ಪರಿಹಾರಧನದ ಮೊತ್ತವೆಷ್ಟು, ಇತ್ಯರ್ಥಪಡಿಸಿದ ಅರ್ಜಿಗಳ ಸಂಖ್ಯೆ ಮತ್ತು ಪರಿಹಾರಧನವೆಷ್ಟು; ಇತ್ಯರ್ಥವಾಗದೇ ಬಾಕಿಯಿರುವ ಅರ್ಜಿಗಳ ಸಂಖ್ಯೆ ಹಾಗೂ ಪರಿಹಾರಧನದ ಮೊತ್ತವೆಷ್ಟು; (ವಲಯವಾರು ಮಾಹಿತಿಯನ್ನು ಒದಗಿಸುವುದು)

(ಇ) ಈ ಪರಿಹಾರಧನ ಕೋರಿ ಸಲ್ಲಿಸಿದ ಅರ್ಜಿಗಳ ಇತ್ಯರ್ಥಪಡಿಸುವ ಮತ್ತು ಅನುದಾನ ಬಿಡುಗಡೆಯ ವಿಳಂಬದಿಂದ ರೈತರು ಸಂಕಷ್ಟವನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದನ್ನು ತಡೆಗಟ್ಟಲು ಕಾಡುಪ್ರಾಣಿಯಿಂದ ಬೆಳೆನಾಶದ ಪರಿಹಾರ ಕೋರಿಕೆ ಅರ್ಜಿಯನ್ನು ಸಕಾಲದ ವ್ಯಾಪ್ತಿಗೆ ತರುವ ಉದ್ದೇಶ ಸರ್ಕಾರದ ಮುಂದಿದೆಯೇ; ಇಲ್ಲವಾದಲ್ಲಿ, ಕಾರಣವೇನು?